# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 718

ಸದಸ್ಯರ ಹೆಸರು : ಶ್ರೀ ವಿಜಯ್ ಸಿಂಗ್

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 05.03.2021

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯ ತಾಲ್ಲೂಕು ಕೇಂದ್ರದಿಂದ ಹಳ್ಳಿಗಳಿಗೆ ಸಾರಿಗೆ ಸೌಲಭ್ಯವಿಲ್ಲದೆ ಜನಸಾಮಾನ್ಯರು ಹಾಗೂ ವಿದ್ಯಾರ್ಥಿಗಳಿಗೆ ತೊಂದರೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೀದರ್ ಜಿಲ್ಲೆಯ ವ್ಯಾಪ್ತಿಯಲ್ಲಿ 667 ಗ್ರಾಮಗಳ ಪೈಕಿ 661 ಗ್ರಾಮಗಳಿಗೆ ಸಾರಿಗೆ ಸೌಲಭ್ಯ ಒದಗಿಸಲಾಗಿದೆ. ಈ ಕೆಳಕಂಡ ಉಳಿದ 06 ಗ್ರಾಮಗಳಿಗೆ ಬಸ್ ಸಂಚಾರಕ್ಕೆ ಯೋಗ್ಯ ರಸ್ತೆ ಸಂಪರ್ಕವಿಲ್ಲದ ಕಾರಣ ಬಸ್ ಸೇವೆ ಒದಗಿಸಿರುವುದಿಲ್ಲ: (ಕೆಳಗಿನ ಕೋಷ್ಟಕ) |

| ಕ್ರ ಸಂ. | ತಾಲೂಕು | ಒಟ್ಟು ಗ್ರಾಮಗಳ ಪೈಕಿ | ಬಸ್ ಸೇವೆ ಒದಗಿಸಿದ ಗ್ರಾಮಗಳ ಸಂಖ್ಯೆ | ಬಸ್ ಸೇವೆ ಒದಗಿಸಬೇಕಾದ ಗ್ರಾಮಗಳ ಸಂಖ್ಯೆ |
|---|---|---|---|---|
| 1 | ಬೀದರ್ | 151 | 151 | 0 |
| 2 | ಹುಮನಾಬಾದ | 47 | 46 | 1 |
| 3 | ಬಸವಕಲ್ಯಾಣ | 131 | 131 | 0 |
| 4 | ಭಾಲ್ಕಿ | 134 | 133 | 1 |
| 5 | ಔರಾದ | 95 | 93 | 2 |
| 6 | ಕಮಲನಗರ | 54 | 52 | 2 |
| 7 | ಹುಲಸೂರು | 18 | 18 | 0 |
| 8 | ಚಿಟಗುಪ್ಪ | 37 | 37 | 0 |
| | ಒಟ್ಟು | 667 | 661 | 6 |

ಕೋವಿಡ್-19ರ ಹಿನ್ನೆಲೆಯಲ್ಲಿ ವಿಧಿಸಲಾಗಿದ್ದ ಲಾಕ್‌ಡೌನ್ ತೆರವಿನ ನಂತರ ಬೇಡಿಕೆಗನುಸಾರ ಗ್ರಾಮೀಣ ಪ್ರದೇಶಗಳಲ್ಲಿ ಸಾರಿಗೆಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದ್ದು ಇದರ ಅನುಕೂಲತೆಯನ್ನು ಸಾರ್ವಜನಿಕ ಪ್ರಯಾಣಿಕರು ಹಾಗೂ ವಿದ್ಯಾರ್ಥಿಗಳು ಪಡೆದುಕೊಳ್ಳುತ್ತಿದ್ದಾರೆ.

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಆ | ಬಸವ ಕಲ್ಯಾಣ ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ಸಾರಿಗೆ ಸೌಲಭ್ಯದಿಂದ ಜನ ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ; ಸಾರಿಗೆ ಸೌಲಭ್ಯವನ್ನು ಒದಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? (ತಾಲ್ಲೂಕುವಾರು ವಿವರ ನೀಡುವುದು) | ಬಸವಕಲ್ಯಾಣ ತಾಲೂಕಿನಲ್ಲಿ ಒಟ್ಟು 131 ಜನವಸತಿ ಗ್ರಾಮಗಳಿದ್ದು, ಎಲ್ಲಾ ಗ್ರಾಮಗಳಿಗೂ ಸಾರಿಗೆ ಸೌಲಭ್ಯ ಕಲ್ಪಿಸಲಾಗಿದೆ. ಬಸವಕಲ್ಯಾಣ ತಾಲೂಕಿನಿಂದ ಬಸ್ ಸೇವೆ ವಂಚಿತರಾಗಿರುವ ಗ್ರಾಮದ ಯಾವುದೇ ದೂರು ಬಂದಿರುವುದಿಲ್ಲ.<br><br>ಮುಂದುವರೆದು ಸಾರ್ವಜನಿಕ ಪ್ರಯಾಣಿಕರಿಂದ ಮತ್ತು ವಿದ್ಯಾರ್ಥಿಗಳಿಂದ ಇನ್ನೂ ಹೆಚ್ಚಿನ ಸರತಿಗಳನ್ನು ಕಾರ್ಯಾಚರಣೆ ಮಾಡಲು ಬೇಡಿಕೆ ಬಂದಲ್ಲಿ, ಅದಕ್ಕನುಗುಣವಾಗಿ ಹೆಚ್ಚಿನ ಸಾರಿಗೆ ಸೌಕರ್ಯ ಒದಗಿಸಲಾಗುವುದು. |

ಸಂಖ್ಯೆ: ಟಿಡಿ 55 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು